# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : **912**

ಸದಸ್ಯರ ಹೆಸರು : ಶ್ರೀ ಐವನ್ ಡಿ'ಸೋಜಾ

ಉತ್ತರಿಸಬೇಕಾದ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸಬೇಕಾದ ದಿನಾಂಕ : 13-03-2020

| ಕ್ರ ಸಂ. | ಪ್ರಶ್ನೆ | ಉತ್ತರ |
| --- | --- | --- |
| (ಅ) | ಮಂಗಳೂರು ಪ್ರಾದೇಶಿಕ ಸಾರಿಗೆ ಇಲಾಖೆಗಳ ವ್ಯಾಪ್ತಿಯಲ್ಲಿ ಈ ಹಿಂದೆ ಆಯವ್ಯಯದಲ್ಲಿ ಘೋಷಿಸಲಾದ ಯೋಜನೆಗಳನ್ನು ಇನ್ನೂ ಅನುಷ್ಠಾನಗೊಳಿಸದಿರಲು ಕಾರಣವೇನು; (ವಿವರ ನೀಡುವುದು) | 2013-14ನೇ ಸಾಲಿನ ಆಯವ್ಯಯದಲ್ಲಿ ಮಂಗಳೂರಿನಲ್ಲಿ ಭಾರಿ ವಾಹನ ಚಾಲಕರ ತರಬೇತಿ ಸಂಸ್ಥೆ ಮತ್ತು ಸ್ವಯಂಚಾಲಿತ ಚಾಲನಾ ಪರೀಕ್ಷಾ ಪಥವನ್ನು ಸ್ಥಾಪಿಸಲು ಘೋಷಿಸಲಾಗಿದೆ.<br><br>ಎರಡು ಕಾಮಗಾರಿಗಳನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ, ಬೆಂಗಳೂರು ಇವರಿಗೆ ವಹಿಸಲಾಗಿದ್ದು, ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ. |
| (ಆ) | ಪ್ರಾದೇಶಿಕ ಸಾರಿಗೆ ಇಲಾಖೆಯಲ್ಲಿ ಸಿಬ್ಬಂದಿಗಳ ಕೊರತೆಯಿಂದ "ಏಜೆಂಟ್‌ಗಳೇ" ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು; | ಸಾರಿಗೆ ಇಲಾಖೆಯಲ್ಲಿ ದಿನಾಂಕ:01-02-2020 ರಂತೆ ಮಂಜೂರಾದ ಒಟ್ಟು 2812 ಹುದ್ದೆಗಳ ಪೈಕಿ 1397 ಕಾರ್ಯನಿರತ ಹುದ್ದೆಗಳಿದ್ದು, 1415 ಹುದ್ದೆಗಳು ಖಾಲಿ ಇರುತ್ತವೆ. ಇದರಿಂದಾಗಿ ಇಲಾಖೆಯು ತೀವ್ರತರ ಅಧಿಕಾರಿ/ ಸಿಬ್ಬಂದಿ ಕೊರತೆಯನ್ನು ಎದುರಿಸುತ್ತಿದೆ. ಆದಾಗ್ಯೂ ಪ್ರಸ್ತುತ ಲಭ್ಯವಿರುವ ಅಧಿಕಾರಿ/ಸಿಬ್ಬಂದಿ ವರ್ಗದವರಿಂದ ಹಾಗೂ ಕಿಯೋನಿಕ್ಸ್ ಮತ್ತು ಇತರೆ ಏಜೆನ್ಸಿ ವತಿಯಿಂದ ಹೊರಗುತ್ತಿಗೆ ಆಧಾರದ ಮೇಲೆ ಸಿಬ್ಬಂದಿ ಸೇವೆಯನ್ನು ಪಡೆದು ಸಾರ್ವಜನಿಕರಿಗೆ ತೊಂದರೆಯಾಗದಂತೆ ಕೆಲಸಗಳನ್ನು ನಿರ್ವಹಿಸಲಾಗುತ್ತಿದೆ. ಸಾರ್ವಜನಿಕರು ಮಧ್ಯವರ್ತಿಗಳನ್ನು ಸಂಪರ್ಕಿಸದೇ ನೇರವಾಗಿ ಕಛೇರಿಯ ಅಧಿಕಾರಿ/ ಸಿಬ್ಬಂದಿಯವರನ್ನು ಭೇಟಿ ಮಾಡಿ ಅವರ ಕೆಲಸಗಳನ್ನು ಮಾಡಿಸಿಕೊಳ್ಳಬೇಕೆಂದು ಕಛೇರಿಯ ಆವರಣದಲ್ಲಿ ಸೂಚನಾ ಫಲಕಗಳನ್ನು ಹಾಕಲಾಗಿದೆ.<br><br>ಅಲ್ಲದೆ, ಸಾರ್ವಜನಿಕರಿಗೆ ಅವರುಗಳ ವಾಹನ ಅನುಜ್ಞಾ ಪತ್ರ ಮತ್ತು ವಾಹನ ನೋಂದಣಿಯ ಸ್ಮಾರ್ಟ್ ಕಾರ್ಡ್‌ಗಳನ್ನು ಅವರ ಮನೆಯ ವಿಳಾಸಗಳಿಗೆ ಅಂಚೆ ಸೇವೆಯ ಮೂಲಕ ತಲುಪಿಸಲಾಗುತ್ತಿದೆ. ಇಲಾಖೆಯಲ್ಲಿ ವಾಹನ್-4, ಸಾರಥಿ-4 ಮತ್ತು ಇ-ಪೇಮೆಂಟ್ ಆಫ್ ಟ್ಯಾಕ್ಸ್ ನಂತಹ ಆನ್‌ಲೈನ್ ಸೇವೆಗಳನ್ನು ರಾಜ್ಯದ ಎಲ್ಲಾ ಕಛೇರಿಗಳಲ್ಲಿ ಜಾರಿಗೆ ತರಲಾಗಿದೆ ಹಾಗೂ ಸಾರ್ವಜನಿಕರು ಕರ್ನಾಟಕ-1, ಬೆಂಗಳೂರು-1 ಮತ್ತು ಮೊಬೈಲ್-1 ಎಂಬ ಆ್ಯಪ್‌ಗಳಲ್ಲಿ ವಾಹನ ವಿವರ/ಮಾಹಿತಿಗಳನ್ನು ಪಡೆಯಬಹುದಾಗಿರುತ್ತದೆ. |

<table>
<tr>
<td>(ಇ)</td>
<td>ಸಾರಿಗೆ ಇಲಾಖೆಯಿಂದ ವಾರ್ಷಿಕ ಸರ್ಕಾರಕ್ಕೆ ಬರುವ ಆದಾಯವೆಷ್ಟು; (ವಿವರ ಒದಗಿಸುವುದು)</td>
<td>ಸಾರಿಗೆ ಇಲಾಖೆಯ ಕಳೆದ ಐದು ವರ್ಷಗಳ ರಾಜಸ್ವ ಸಂಗ್ರಹಣೆಯ ವಿವರಗಳು ಈ ಕೆಳಕಂಡಂತಿದೆ.
<table>
<tr><th>ವರ್ಷ</th><th>ರಾಜಸ್ವ ಗುರಿ</th><th>ವಸೂಲಾದ ರಾಜಸ್ವ</th></tr>
<tr><td>2014–15</td><td>3984.00</td><td>4145.00</td></tr>
<tr><td>2015–16</td><td>4397.07</td><td>4608.58</td></tr>
<tr><td>2016–17</td><td>5026.78</td><td>5262.41</td></tr>
<tr><td>2017–18</td><td>5561.62</td><td>5954.03</td></tr>
<tr><td>2018–19</td><td>6167.61</td><td>6205.93</td></tr>
<tr><td>2019–20<br>(ಫೆಬ್ರುವರಿ–2020ರ ಮಾಹೆಯವರೆಗೆ)</td><td>6051.80</td><td>5798.25</td></tr>
</table>
</td>
</tr>
<tr>
<td>(ಈ)</td>
<td>ಮಂಗಳೂರು ನಗರದಲ್ಲಿರುವ ಪ್ರಾದೇಶಿಕ ಸಾರಿಗೆ ಅಧಿಕಾರಿಯವರ ಕಛೇರಿ ಮತ್ತು ಇತರ ಕಛೇರಿಗಳನ್ನು ನಗರದ ಹೊರವಲಯಕ್ಕೆ ಸ್ಥಳಾಂತರಿಸಲು ನಿರ್ಣಯಿಸಲಾಗಿದ್ದರೂ ಕ್ರಮ ಕೈಗೊಳ್ಳದೇ ಇರಲು ಕಾರಣವೇನು: (ವಿವರ ಒದಗಿಸುವುದು)</td>
<td>ಮಂಗಳೂರು ನಗರದಲ್ಲಿರುವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಯು ಸ್ವಂತ ಕಟ್ಟಡವಾಗಿದ್ದು, ಅಲ್ಲಿಯೇ ಕಾರ್ಯನಿರ್ವಹಿಸಲಾಗುತ್ತಿದೆ. ಈ ಕಛೇರಿಯನ್ನು ಸ್ಥಳಾಂತರಿಸುವ ಪ್ರಸ್ತಾವನೆ ಇರುವುದಿಲ್ಲ.</td>
</tr>
</table>

ಟಿಡಿ 28 ಟಿಡಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು